# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೯, ೨೦೧೫ (ಕಾರ್ತಿಕ ೭, ಶಕ ವರ್ಷ ೧೯೩೭)<br>Bengaluru, Thursday, October 29, 2015 ( Karthika 7, Shaka Varsha 1937) | ಸಂಚಿಕೆ ೪೩<br>Issue 43 |
|---|---|---|


## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ ) ಕಾಯ್ದೆ, 1973 ರ ಕಲಂ 11 ರಡಿ)**

**ಸಂಖ್ಯೆ: ಕೆ.ಎಸ್.ಎ/ಸಿ.ಆರ್/23/15-16, ಬೆಂಗಳೂರು, ದಿನಾಂಕ:01-09-2015.**

ಬೆಂಗಳೂರು ನಗರ, ಕೆ.ಆರ್.ಪುರಂ ವಿಧಾನ ಸಭಾ ಕ್ಷೇತ್ರದ ಕೆರೆ ಅಂಗಳದಲ್ಲಿರುವ ಆರ್.ಎಂ.ಎಸ್ ಕಾಲೋನಿ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶದಲ್ಲಿ 22 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶ ಅತ್ಯಂತ ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ, ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ 3ನೇ ಉಪವಿಭಾಗ ರವರು ದಿನಾಂಕ: 21.11.2014 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 0-26 ಗುಂಟೆ ಪ್ರದೇಶದಲ್ಲಿ 90 ಜನ ಸಂಖ್ಯೆಯ 22 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರು ರವರು ಪತ್ರ ಸಂಖ್ಯೆ:ಕಕೊಅಮ/ಕಂ-1/ಆರ್-2/25/09-10/308 ದಿನಾಂಕ: 21.07.2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973 ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973 ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರಸಂ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ | ಚಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಸೀಗೇಹಳ್ಳಿ ಗ್ರಾಮ, ಆರ್.ಎಂ.ಎಸ್ ಕಾಲೋನಿ, ಕೊಳಚೆ ಪ್ರದೇಶ | ಸರ್ಕಾರಿ ಕೆರೆ ಅಂಗಳ | 32 | 0–26 ಗುಂಟೆ | ಸ.ನಂ.32ರ ಕೆರೆ ಅಂಗಳ | ಭಟ್ಟರಹಳ್ಳಿ ಗಡಿ | ಸ.ನಂ. 32ರ ಕೆರೆ ಅಂಗಳ | ಸ.ನಂ 32ರ ಕೆರೆ ಅಂಗಳ ಮತ್ತು ರಸ್ತೆ |

**PR-102**
**SC-50**

**ವಿ.ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ಸಂಖ್ಯೆ: ಕೆ.ಎಸ್.ಎ/ಸಿ.ಆರ್/19/2005–06 (ಭಾಗ), ಬೆಂಗಳೂರು, ದಿನಾಂಕ :15–09–2015.**

ಸಂ.ಕೆ.ಎಸ್.ಎ/ಸಿಆರ್/19/2005–06, ದಿನಾಂಕ: 29.04.2009 ರಂದು ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ, ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ನಾಯಂಡಹಳ್ಳಿ ಗ್ರಾಮದ ಸ.ನಂ. 63/2ರ 0.20 ಗುಂಟೆ ಪ್ರದೇಶದಲ್ಲಿನ ವಿನಾಯಕ ಬಡಾವಣೆ ಕೊಳಚೆ ಪ್ರದೇಶವನ್ನು, ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 3ರಡಿ ಪ್ರಾಥಮಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊಅಮ/ಕಂ–2/ವಿನಿ–1/ಬೆಂ/ವಿನಾಯಕನಗರ/14–15/656, ದಿನಾಂಕ: 22.11.2014 ಹಾಗೂ ಸಂಖ್ಯೆ: ಕಕೊಅಮ/ಕಂ–1/ಸಿಆರ್–1/54/2010–11/278, ದಿನಾಂಕ: 07.07.2015ರ ಪತ್ರಗಳಲ್ಲಿ ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಶ್ರೀಮತಿ ಕೆ.ಎಸ್.ಶಾರದಾ ಮತ್ತು ಇತರರು ಮಾನ್ಯ ಕರ್ನಾಟಕ ಉಚ್ಛನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 2940–2957/2011 ಮತ್ತು 9317–9325/2011 ರ ದಾವೆ ದಾಖಲಿಸಿದ್ದು, ಸದರಿ ದಾವೆಯು ವಜಾ ಆಗಿರುತ್ತದೆ ಮತ್ತು ಈ ಕಛೇರಿಯ ನ್ಯಾಯಾಲಯದಲ್ಲಿ ಪ್ರಕರಣ ಸಂಖ್ಯೆ: ಸಂ.ಕೆ.ಎಸ್.ಎ/ಸಿಆರ್/19/2005–06, ದಿನಾಂಕ: 01.10.2013 ರಂದು ಆದೇಶವಾಗಿದ್ದು ಪ್ರಕರಣವು ಖುಲಾಸಿಯಾಗಿರುವುದಾಗಿ ಉಳಿದಂತೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದುದರಿಂದ ಸದರಿ ಕೊಳಚೆ ಪ್ರದೇಶವನ್ನು ಮಂಡಳಿಯ ಕಾಯ್ದೆ, ಕಲಂ–3ರಡಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಲು ಕೋರಿರುತ್ತಾರೆ.

ಪ್ರಸ್ತಾವಿತ ಕೊಳಚೆ ಪ್ರದೇಶದಲ್ಲಿ ನಿವಾಸಿಗಳು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಕುಡಿಯುವ ನೀರು, ಬೀದಿ ದೀಪ, ಚರಂಡಿ ಶೌಚಾಲಯ ಮತ್ತು ಇನ್ನಿತರೆ ಮೂಲ ಸೌಲಭ್ಯ ಕಲ್ಪಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ, 1973 ರಡಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮಂಡಳಿಯ ಕಾಯ್ದೆ, 3 ರಡಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆ.

**ಷೆಡ್ಯೂಲ್**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ನಾಯಂಡನಹಳ್ಳಿ ಗ್ರಾಮದ ವಿನಾಯಕ ಬಡಾವಣೆ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರಸಂ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕತ್ವ | ಸರ್ವೆ ನಂ. | ವಿಸ್ತೀರ್ಣ | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ವಿನಾಯಕ ಬಡಾವಣೆ ಕೊಳಚೆ ಪ್ರದೇಶ, ನಾಯಂಡನಹಳ್ಳಿ ಗ್ರಾಮ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು | ITI ಗೃಹ ನಿರ್ಮಾಣ ಸಹಕಾರ ಸಂಘ | 63/2 | 0–20 ಗುಂಟೆ | ರಸ್ತೆ | ಖಾಲಿ ಪ್ರದೇಶ | ಖಾಲಿ ನಿವೇಶನಗಳು | ಖಾಸಗಿ ಮನೆಗಳು |

**ವಿ.ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**PR-103**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ ) ಕಾಯ್ದೆ, 1973 ರ ಕಲಂ 11 ರಡಿ)**

**ಸಂಖ್ಯೆ: ಕೆ.ಎಸ್.ಎ/ಸಿ.ಆರ್/24/15-16, ಬೆಂಗಳೂರು, ದಿನಾಂಕ :01-09-2015.**

ಬೆಂಗಳೂರು ನಗರ, ಕೆ.ಆರ್.ಪುರಂ ವಿಧಾನ ಸಭಾ ಕ್ಷೇತ್ರದ ಕೆರೆ ಅಂಗಳದಲ್ಲಿರುವ ಭಟ್ಟರಹಳ್ಳಿ ಜನತಾ ಕಾಲೋನಿ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶದಲ್ಲಿ 83 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶ ಅತ್ಯಂತ ಅನಾರೋಗ್ಯ ಮತ್ತು ಮಾಲಿನ್ಯದಿಂದ ಕೂಡಿದ್ದು, ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ, ಶೌಚಾಲಯ ಇತ್ಯಾದಿಗಳಿಂದ ವಂಚಿತವಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ 3ನೇ ಉಪವಿಭಾಗ ರವರು ದಿನಾಂಕ: 21.11.2014 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 1-12 ಎಕರೆ/ಗುಂಟೆ ಪ್ರದೇಶದಲ್ಲಿ 350 ಜನ ಸಂಖ್ಯೆಯ 83 ಕುಟುಂಬಗಳು ಗುಡಿಸಲುಗಳನ್ನು ಹಾಕಿಕೊಂಡು ವಾಸಿಸುತ್ತಿದ್ದು, ಈ ಜಮೀನು ಕೆರೆ ಪ್ರದೇಶವಾಗಿರುವುದಾಗಿ ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರು ರವರು ಪತ್ರ ಸಂಖ್ಯೆ:ಕಕೊಅಮ/ಕಂ-1/ಆರ್-2/138/14-15/309, ದಿನಾಂಕ: 21.07.2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973 ರ ಕಲಂ 11 ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973 ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು **ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.**

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ.ಸಂ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ.ನಂ. | ವಿಸ್ತೀರ್ಣ ಎ/ಗುಂ | ಚಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಭಟ್ಟರಹಳ್ಳಿ ಜನತಾ ಕಾಲೋನಿ, ಕೊಳಚೆ ಪ್ರದೇಶ | ಸರ್ಕಾರಿ ಕೆರೆ ಅಂಗಳ | 2 | 0-35 | ಸ.ನಂ. 2ರ ಕೆರೆ ಅಂಗಳ ಮತ್ತು ಸ.ನಂ.79, 1ರ ಉಳಿಕೆ ಜಾಗ | ರಸ್ತೆ | ಸ.ನಂ. 2ರ ಕೆರೆ ಅಂಗಳ | ರಸ್ತೆ ಮತ್ತು ಸ.ನಂ. 1, ಬಿಬಿಎಂಪಿ ಜಾಗ |
| | | ಸರ್ಕಾರಿ ಫಡಾ | 79 | 0-07 | | | | |
| | | ಸರ್ಕಾರಿ ಗುಂಡು ತೋಪು | 1 | 0-08 | | | | |
| | | ಗ್ರಾಮಠಾಣ ವ್ಯಾಪ್ತಿ | - | 0-02 | | | | |
| | | **ಒಟ್ಟು** | | **1-12** | | | | |

**PR-104**
**SC-50**

**ವಿ.ಶಂಕರ್**
ಜಿಲ್ಲಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂಖ್ಯೆ: ಕೆ.ಎಸ್.ಎ:ಸಿ.ಆರ್:40/2014-15, ಬೆಂಗಳೂರು ದಿನಾಂಕ :09-09-2015.**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿನಗರ ವಿಧಾನಸಭಾ ಕ್ಷೇತ್ರದ ಬಿ.ಇ.ಎಂ.ಎಲ್ ಬಡಾವಣೆಯ 4ನೇ ಹಂತದ ತಂದೆಪೆರಿಯಾರ್‌ನಗರ ಕೊಳಚೆ ಪ್ರದೇಶದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 120 ಕುಟುಂಬಗಳಿಗೂ ಹೆಚ್ಚು ವಾಸವಾಗಿದ್ದು, ಸದರಿ ಪ್ರದೇಶವು ಮನುಷ್ಯ ವಾಸ ಮಾಡಲು ಯೋಗ್ಯವಲ್ಲದ ಹಾಗೂ ಅನಾರೋಗ್ಯಕರ ಪರಿಸ್ಥಿತಿಯಲ್ಲಿರುತ್ತಾರೆ. ಕುಡಿಯುವ ನೀರು, ಬೀದಿ ದೀಪ, ಶೌಚಾಲಯ ಮುಂತಾದ ಮೂಲಸೌಲಭ್ಯ ಹಾಗೂ ಪುನರ್-ವಸತಿ ಕಲ್ಪಿಸುವ ಅಗತ್ಯವಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ, 1973ರ ಸೆಕ್ಷನ್ 3ರ ಅಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಲು ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರಿಂದ ಪತ್ರ ಸಂಖ್ಯೆ:ಕಕೊಅಮ/ಕಂ-2/ಆರ್-8/38/2014-15/36, ದಿನಾಂಕ: 10-04-2015ರಂತೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973ರ ಸೆಕ್ಷನ್ 3ರ ಅಡಿ ಕೊಳಚೆ ಪ್ರದೇಶವೆಂದು ಘೋಷಿಸಿರುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಏತನ್ಮಧ್ಯೆ ಸರ್ಕಾರದ ಸುತ್ತೋಲೆ ಸಂಖ್ಯೆ:71/ಕೋಮಂಇ/2009, ದಿನಾಂಕ: 24-02-2010ರಲ್ಲಿ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973ರ ಸೆಕ್ಷನ್ 3 ಮತ್ತು 11 ರಡಿಯಲ್ಲಿ ಜಿಲ್ಲಾಧಿಕಾರಿಗಳು, ಕೊಳಚೆ ಪ್ರದೇಶಗಳನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವ ಮುನ್ನ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರ ಅನುಮೋದನೆ ಪಡೆಯತಕ್ಕದ್ದೆಂದು ಸೂಚನೆಯಿದ್ದು, ಆ ಪ್ರಕಾರವಾಗಿ ಕೊಳಚೆ ಪ್ರದೇಶಗಳೆಂದು ಘೋಷಣೆ ಮಾಡಬೇಕಾದ ಪ್ರಸ್ತಾವನೆಗಳನ್ನು ಈ ಕಛೇರಿಯಿಂದ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುತ್ತಿದ್ದು, ತದನಂತರದಲ್ಲಿ ಸರ್ಕಾರದ ಪತ್ರ ಸಂಖ್ಯೆ:ವಇ/71/ಕೊಮಂಇ/2009, ದಿನಾಂಕ:12-07-2010ರ ಪತ್ರದಲ್ಲಿ ಕೊಳಚೆ ಪ್ರದೇಶಗಳೆಂದು ಘೋಷಿಸುವ ಬಗ್ಗೆ ಇನ್ನು ಮುಂದೆ ಸರ್ಕಾರದ ಪೂರ್ವಾನುಮೋದನೆ ಕೋರಿ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವ ಬದಲು ದಿನಾಂಕ: 02-07-2010 ರಲ್ಲಿನ ಸೂಚನೆಯಂತೆ ಮತ್ತು ಹಾಲಿ ಅಸ್ತಿತ್ವದಲ್ಲಿರುವ ನಿಯಮಗಳಡಿಯ ಕಾರ್ಯವಿಧಾನವನ್ನು ಅನುಸರಿಸಿದಂತೆ ಕ್ರಮವಹಿಸಿ, ಅಧಿಸೂಚನೆ ಸಂಖ್ಯೆ:ವಇ/73/ಕೊಮಂಇ/2001, ದಿನಾಂಕ:26-06-2010ರ ಜಿಲ್ಲಾಧಿಕಾರಿಗಳಿಗೆ ಪ್ರದತ್ತ ಮಾಡಲಾಗಿರುವ ಅಧಿಕಾರ ವ್ಯಾಪ್ತಿಯಲ್ಲಿ ಘೋಷಣೆಗೆ ಕ್ರಮವಹಿಸುವುದು ಎಂದು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ, 1973ರ ಸೆಕ್ಷನ್ 3ರ ಅಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು **"ಕೊಳಚೆ ಪ್ರದೇಶ"** ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-560020 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ರಾಜರಾಜೇಶ್ವರಿನಗರ ವಿಧಾನಸಭಾ ಕ್ಷೇತ್ರದ ಬಿ.ಇ.ಎಂ.ಎಲ್ ಬಡಾವಣೆಯ 4ನೇ ಹಂತದ ತಂದೆಪೆರಿಯಾರ್‌ನಗರ ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ:

| ಕ್ರ.ಸಂ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಗ್ರಾಮ/ಸರ್ವೆ ನಂ. | ವಿಸ್ತೀರ್ಣ | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ತಂದೆಪೆರಿಯಾರ್ ನಗರ ಕೊಳಚೆ ಪ್ರದೇಶ, ರಾಜರಾಜೇಶ್ವರಿ ನಗರ ವಿಧಾನಸಭಾ ಕ್ಷೇತ್ರ | ಶ್ರೀ ಲಕ್ಕಪ್ಪ ಬಿನ್ ಹನುಮಯ್ಯ | ಹಲಗೇವಡೇರಹಳ್ಳಿ ಸ.ನಂ.213 | 0-24.08 ಗುಂಟೆ | ಸದರಿ ಸರ್ವೆ ನಂಬರಿನ ಉಳಿಕೆ ಜಮೀನು | ಸದರಿ ಸರ್ವೆ ನಂಬರಿನ ಉಳಿಕೆ ಜಮೀನು | ರಸ್ತೆ ಮತ್ತು ಉಳಿಕೆ ಪ್ರದೇಶ | ಲಾ.ಸ.ನಂ.194 |

**PR-105**
**SC-50**

**ವಿ.ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59